# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1045
2. ಸದಸ್ಯರ ಹೆಸರು : ಶ್ರೀ ಗೋವಿಂದರಾಜು
3. ಉತ್ತರಿಸುವ ದಿನಾಂಕ : 21.09.2021
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ನಗರದಲ್ಲಿರುವ ಎ.ಪಿ.ಎಂ.ಸಿ. ಮಾರುಕಟ್ಟೆಯ ವಿಸ್ತೀರ್ಣವೆಷ್ಟು? | ಕೋಲಾರ ನಗರದಲ್ಲಿರುವ ಎ.ಪಿ.ಎಂ.ಸಿ. ಮಾರುಕಟ್ಟೆಯ ವಿಸ್ತೀರ್ಣ 18 ಎಕರೆ 31 ಗುಂಟೆ. |
| ಆ) | ಈ ಎ.ಪಿ.ಎಂ.ಸಿ. ಮಾರುಕಟ್ಟೆಯು ತುಂಬಾ ಚಿಕ್ಕದಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿದೆ.<br>ಈ ಮಾರುಕಟ್ಟೆಗೆ ಟೊಮೊಟೊ ಪ್ರಮುಖ ಆವಕವಾಗಿದ್ದು, ಜೂನ್‌ನಿಂದ ಡಿಸೆಂಬರ್ ವರೆಗಿನ ಸುಗ್ಗಿ ಸಮಯದಲ್ಲಿ 40000 ಕ್ವಿಂಟಾಲ್‌ಗೂ ಹೆಚ್ಚು ಮಾರುಕಟ್ಟೆಗೆ ಬರುತ್ತದೆ. ನೂರಾರು ಟ್ರಕ್‌ಗಳ ಓಡಾಟ, ರೈತರು, ಪೇಟೆ ಕಾರ್ಯಕರ್ತರು ಮತ್ತು ಹಮಾಲರು ಹೀಗೆ 3000 ಜನ ಈ ಮಾರುಕಟ್ಟೆಯಲ್ಲಿ ವ್ಯವಹರಿಸುವುದರಿಂದ ಲೋಡಿಂಗ್, ಗ್ರೇಡಿಂಗ್ ಹಾಗೂ ಪ್ಯಾಕಿಂಗ್‌ಗೆ ಸ್ಥಳಾವಕಾಶ ಸಾಲದೆ ಸಮಸ್ಯೆ ಉಂಟಾಗುತ್ತಿದೆ. |
| ಇ) | ಹಾಗಿದ್ದಲ್ಲಿ ಈ ಎ.ಪಿ.ಎಂ.ಸಿ. ಮಾರುಕಟ್ಟೆಯನ್ನು ವಿಸ್ತರಿಸಲು ಅರಣ್ಯ ಇಲಾಖೆಯ ಭೂಮಿಯ ಬದಲಾಗಿ ಕಂದಾಯ ಇಲಾಖೆಯ ಎರಡುಪಟ್ಟು ಭೂಮಿಯನ್ನು ಮಂಜೂರು ಮಾಡಲು ಜಿಲ್ಲಾಡಳಿತವು ಸರ್ಕಾರಕ್ಕೆ ಮನವಿ ಸಲ್ಲಿಸಿರುವುದು ನಿಜವೇ? | ಹೌದು<br>ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ, ಇವರು ದಿ:30-07-2021ರಲ್ಲಿ ಅರಣ್ಯ ಇಲಾಖೆಗೆ ಸೇರಿದ ಕೋಲಾರ ತಾಲ್ಲೂಕು, ವಕ್ಕಲೇರಿ ಹೋಬಳಿ ಕಪರಸಿದ್ದನಹಳ್ಳಿ ಗ್ರಾಮದ ಸರ್ವೆ ನಂ.08ರಲ್ಲಿ 17 ಎಕರೆ 10 ಗುಂಟೆ ಮತ್ತು ಮಡೇರಹಳ್ಳಿ ಗ್ರಾಮದ ಸರ್ವೆ ನಂ.35ರಲ್ಲಿ 12 ಎಕರೆ 30 ಗುಂಟೆ ಒಟ್ಟು 30 ಎಕರೆ ಜಮೀನನ್ನು ಕೃಷಿ ಮಾರುಕಟ್ಟೆ ಸಮಿತಿಗೆ ವರ್ಗಾಯಿಸಿ ಇದರ ಬದಲಾಗಿ ಕೋಲಾರ ತಾಲ್ಲೂಕು, ಹೋಳೂರು ಹೋಬಳಿ, ನಾಯಕರಹಳ್ಳಿ ಗ್ರಾಮದ ಸರ್ವೆ ನಂ.192ರಲ್ಲಿ 18-03 ಹೆಕ್ಟೇರ್ ಜಮೀನನ್ನು ಅರಣ್ಯ ಇಲಾಖೆಗೆ ವರ್ಗಾಯಿಸಲು ಜಿಲ್ಲಾಧಿಕಾರಿಗಳಿಗೆ ಅಧಿಕಾರವಿಲ್ಲದಿರುವುದರಿಂದ ಪ್ರಸ್ತಾಪಿತ ಬದಲಿ ಜಮೀನನ್ನು ಅರಣ್ಯ ಇಲಾಖೆಗೆ ವರ್ಗಾಯಿಸಲು ಮಂಜೂರಾತಿ ಹಾಗೂ ಅನುಮೋದನೆ ಕೋರಿ ಕಂದಾಯ ಇಲಾಖೆಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಪ್ರಸ್ತಾವನೆ ಪರಿಶೀಲನೆಯಲ್ಲಿರುತ್ತದೆ. |
| ಈ) | ಹಾಗಿದ್ದಲ್ಲಿ ಜಿಲ್ಲಾಡಳಿತವು ಸಲ್ಲಿಸಿರುವ ಮನವಿಯು ಪ್ರಸ್ತುತ ಯಾವ ಹಂತದಲ್ಲಿದೆ? | |
| ಉ) | ಹಾಗಿದ್ದಲ್ಲಿ ಸದರಿ ಮಾರುಕಟ್ಟೆಯ ಪ್ರಾಂಗಣಕ್ಕೆ ಭೂಮಿಯನ್ನು ಮಂಜೂರು ಮಾಡಲು ಸರ್ಕಾರವು ಕ್ರಮ ಕೈಗೊಳ್ಳುವುದೇ? | ಅರಣ್ಯ ಇಲಾಖೆಯ ಜಮೀನನ್ನು ಕಂದಾಯ ಇಲಾಖೆಯು ಡಿ-ನೋಟಿಫೈ ಮಾಡಿ ಪ್ರಸ್ತಾಪಿತ ಯೋಜನೆಗಾಗಿ ವರ್ಗಾಯಿಸಿದ ನಂತರ ಕ್ರಮವಹಿಸಲಾಗುವುದು. |
| ಊ) | ಹಾಗಿದ್ದಲ್ಲಿ ಹೊಸ ಎ.ಪಿ.ಎಂ.ಸಿ.ಮಾರುಕಟ್ಟೆಯ ನಿರ್ಮಾಣಕ್ಕೆ ಯಾವಾಗ ಭೂಮಿ ಮಂಜೂರು ಮಾಡಲಾಗುವುದು? (ವಿವರಗಳನ್ನು ನೀಡುವುದು) | ಪ್ರಸ್ತಾಪಿತ ಮಂಜೂರಾತಿಗಾಗಿ ಕೋರಿರುವ ಅರಣ್ಯ ಇಲಾಖೆಗೆ ಸೇರಿರುವ ಕೋಲಾರ ತಾಲ್ಲೂಕು, ವಕ್ಕಲೇರಿ ಹೋಬಳಿ, ಕಪರಸಿದನಹಳ್ಳಿ ಗ್ರಾಮದ ಸ..ನಂ.8ರಲ್ಲಿ 17-10 ಎಕರೆ ಹಾಗೂ ಮಡೇರಹಳ್ಳಿ ಗ್ರಾಮದ ಸ.ನಂ.35ರಲ್ಲಿ 12-30 ಎಕರೆಯಂತೆ ಒಟ್ಟು-30-00 ಎಕರೆ ಜಮೀನನ್ನು ಕಂದಾಯ ಇಲಾಖೆಯು ಡಿ-ನೋಟಿಫೈ ಮಾಡಿ ಪ್ರಸ್ತಾಪಿತ ಯೋಜನೆಗಾಗಿ ವರ್ಗಾಯಿಸಿದ ನಂತರ ಕ್ರಮವಹಿಸಲಾಗುವುದು. |

ಸಿಒ 256 ಎಂಆರ್‌ಇ 2021

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು